KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೧೫, ೨೦೧೦ (ಚೈತ್ರ ೨೫, ಶಕ ವರ್ಷ ೧೯೩೨) | ಸಂಚಿಕೆ ೧೫ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಚೇರಿ, ಕೊಪ್ಪಳ**

**ಅಧಿಸೂಚನೆ ಸಂಖ್ಯೆ.ಎಡಿಎಮ್–01/2010, ದಿನಾಂಕ: 27ನೇ ಮಾರ್ಚ್ 2010**

**ವಿಷಯ:** ಶೀಘ್ರಲಿಪಿಗಾರರು/ಬೆರಳಚ್ಚುಗಾರರು /ಬೆರಳಚ್ಚು–ನಕಲುಗಾರರು (ಬ್ಯಾಕ್ ಲಾಗ್ ಹುದ್ದೆ) / ಜಾರಿಕಾರರ / ಜವಾನರ ಅಭ್ಯರ್ಥಿಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** (1) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ II 205/2004 ದಿನಾಂಕ: 17–6–2009.

(2) ಅಧಿಸೂಚನೆ ಸಂಖ್ಯೆ: ಎಡಿಎಮ್: 01/2009, ದಿನಾಂಕ: 17–08–2009.

(3) ಅಧಿಸೂಚನೆ ಕಛೇರಿ ವರದಿ ದಿನಾಂಕ: 14–08–2009.

(4) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ I / 220/1996, ದಿನಾಂಕ: 26–11–2009.

(5) ಅಧಿಸೂಚನೆ ಪತ್ರ ಸಂಖ್ಯೆ: ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ I / 220/1996, ದಿನಾಂಕ 8–03–2010.

(6) ಅಧಿಸೂಚನೆ ಕಛೇರಿ ವರದಿ ದಿನಾಂಕ: 24–03–2010.

(7) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ ಎಲ್‌ಸಿಎ II/ 164/2009, ದಿನಾಂಕ: 18–3–2010.

(8) ಅಧಿಸೂಚನೆ ಕಛೇರಿ ವರದಿ ದಿನಾಂಕ: 26–03–2010.

ಮೇಲ್ಕಂಡ ಅಧಿಸೂಚನೆ ಅನ್ವಯ ಕೊಪ್ಪಳ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು (1 ಹುದ್ದೆ) /ಬೆರಳಚ್ಚುಗಾರರು (2 ಹುದ್ದೆ), ಬೆರಳಚ್ಚು–ನಕಲುಗಾರರ (1 ಹುದ್ದೆಗೆ) ಮತ್ತು ಜಾರಿಕಾರ (3 ಹುದ್ದೆ) ಮತ್ತು ಜವಾನರ (2 ಹುದ್ದೆ) ಮತ್ತು ಭರ್ತಿಯಾಗದೆ ಉಳಿದಿರುವ ಬ್ಯಾಕ್ ಲಾಗ್ ಹುದ್ದೆಯಾದ ಬೆರಳಚ್ಚು–ನಕಲುಗಾರರ (1 ಹುದ್ದೆಗೆ) ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ / ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ **ದಿನಾಂಕ: 28–04–2010 ರಂದು ಮಧ್ಯಾಹ್ನ 1–30** ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 28–04–2010 ಮಧ್ಯಾಹ್ನ 1–30 ಗಂಟೆ**

**ಹುದ್ದೆಯ ಪದ ನಾಮ : ಶೀಘ್ರಲಿಪಿಗಾರ**

ಖಾಲಿ ಹುದ್ದೆಗಳ ಸಂಖ್ಯೆ: 01

ವೇತನ ಶ್ರೇಣಿ: 7250–175–7800–200–8600–225–9500–250–10500–300–12300–350–13350. ಹಾಗೂ ಲಭ್ಯವಿರುವ ಇತರೆ ಭತ್ಯಗಳು.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|
| ಪ್ರವರ್ಗ– I | 01 | | | | | | 01 |
| **ಒಟ್ಟು** | **01** | | | | | | **01** |

**ಶೈಕ್ಷಣಿಕ ವಿದ್ಯಾರ್ಹತೆ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (Senior Grade) ಕನ್ನಡ ಮತ್ತು ಅಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.
3) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (Senior Grade) ಕನ್ನಡ ಮತ್ತು ಅಂಗ್ಲ ಭಾಷೆಗಳ ಶೀಘ್ರಲಿಪಿ ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ:**

ಒಂದು ನಿಮಿಷಕ್ಕೆ 120 ಶಬ್ಧಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ.

**(2) ಹುದ್ದೆಯ ಪದನಾಮ: ಬೆರಳಚ್ಚುಗಾರರು**

ಖಾಲಿ ಹುದ್ದೆಗಳ ಸಂಖ್ಯೆ: 02

ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|
| ಅ) ಪ್ರ–2(ಎ) | | 01 | | | | | 01 |
| ಆ) ಸಾ.ಅ. (G.M.) | | | 01 | | | | 01 |
| **ಒಟ್ಟು** | | 01 | 01 | | | | 02 |

**ಶೈಕ್ಷಣಿಕ ವಿದ್ಯಾರ್ಹತೆ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಕಿರಿಯ ದರ್ಜೆ ಮತ್ತು ಹಿರಿಯ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು. ಅಥವಾ ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯ ನಡೆಸುವ ಸೆಕ್ರೆಟರಿಯಲ್ ಪ್ರಾಕ್ಟಿಸ್ ಪಠ್ಯಕ್ರಮದ ಡಿಪ್ಲೊಮಾ ಪದವಿಯೊಂದಿಗೆ ಕನ್ನಡ ಮತ್ತು ಅಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು.

**ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತ ಲೇಖನ ನೀಡಲಾಗುವುದು.

(3) **ಹುದ್ದೆಯ ಪದನಾಮ ಃ ಬೆರಳಚ್ಚು –ನಕಲುಗಾರರು (ಬ್ಯಾಕ್ ಲಾಗ್ 1 ಹುದ್ದೆ)**

ಖಾಲಿ ಹುದ್ದೆಗಳ ಸಂಖ್ಯೆಃ 02

ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|
| ಪರಿಶಿಷ್ಟ ಜಾತಿ (ಎಸ್.ಸಿ) | | 01 (ಬ್ಯಾಕ್ ಲಾಗ್ ಹುದ್ದೆ) | | | | | 01 |

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|
| ಸಾಮಾನ್ಯ ವರ್ಗ ( G.M.) | | 01 | | | | | 01 |
| **ಒಟ್ಟು** | | **02** | | | | | **02** |

**ಶೈಕ್ಷಣಿಕ ವಿದ್ಯಾರ್ಹತೆ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿವತಿಯಿಂದ ನಡೆಸುವ ಕನ್ನಡ ಹಾಗೂ ಅಂಗ್ಲ ಭಾಷೆಗಳ ಬೆರಳಚ್ಚು ಕಿರಿಯ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು. ಅಥವಾ ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯ ನಡೆಸುವ ಸೆಕ್ರೆಟರಿಯಲ್ ಪ್ರಾಕ್ಟಿಸ್ ಪಠ್ಯಕ್ರಮದ ಡಿಪ್ಲೊಮಾ ಪದವಿಯೊಂದಿಗೆ ಕನ್ನಡ ಮತ್ತು ಅಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು.

**ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

(4) **ಹುದ್ದೆಯ ಪದನಾಮ : ಜಾರಿಕಾರರು**

ಖಾಲಿ ಹುದ್ದೆಗಳ ಸಂಖ್ಯೆ: 03

ವೇತನ ಶ್ರೇಣಿ: 5200–100–6000–125–6500–150–7100–175–7800–200–8200.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|
| ಪರಿಶಿಷ್ಟ ಜಾತಿ (ಎಸ್.ಸಿ) | | | 01 | | | | 01 |
| ಪ್ರವರ್ಗ III (A) | 01 | | | | | | 01 |
| ಸಾಮಾನ್ಯ ವರ್ಗ (G.M.) | | 01 | | | | | 01 |
| **ಒಟ್ಟು** | **01** | **01** | **01** | | | | **03** |

**ಶೈಕ್ಷಣಿಕ ವಿದ್ಯಾರ್ಹತೆ**

1) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
2) ಲೈಟ್ ಮೋಟರ್ ವೆಹಿಕಲ್ ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

(5) **ಹುದ್ದೆಯ ಪದನಾಮ : ಜವಾನರು**

ಖಾಲಿ ಹುದ್ದೆಗಳ ಸಂಖ್ಯೆ: 02

ವೇತನ ಶ್ರೇಣಿ: 4800–100–6000–125–6500–150–7100–175–7275.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾ.ಸೈ. | ಕ.ಮಾ.ಅ. | ಯೋ.ಅ. | ಒಟ್ಟು |
|---|---|---|---|---|---|---|---|
| ಪ್ರವರ್ಗ II ( B) | | 01 | | | | | 01 |
| ಸಾಮಾನ್ಯ ವರ್ಗ ( G.M.) | | 01 | | | | | 01 |
| **ಒಟ್ಟು** | | **02** | | | | | **02** |

**ಶೈಕ್ಷಣಿಕ ವಿದ್ಯಾರ್ಹತೆ**

1) 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣತೆ.
2) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆಃ ಎಫ್‌ಡಿ(ಎಸ್‌ಪಿಎಲ್) 04 ಪಿಟಿಐ 2005, ದಿನಾಂಕ:31–03–2006 ರಂತೆ.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಾನುಸಾರ ಆಯ್ಕೆ ಮಾಡಲಾಗುವುದು.

**ಸ್ಪರ್ಧಾತ್ಮಕ ಪರೀಕ್ಷೆ:** ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು–ನಕಲುಗಾರ ಹುದ್ದೆಗೆ ಅಭ್ಯರ್ಥಿಯನ್ನು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಿಕೊಳ್ಳಲಾಗುವುದು.

**ಪರಿವೀಕ್ಷಣಾ ಅವಧಿ :** ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು.

**ವಯೋಮಿತಿ :**

1) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

2) ಗರಿಷ್ಠ ವಯೋಮಿತಿ :

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ, | 38 ವರ್ಷ |
| ಪ.ಜಾ / ಪ.ಪಂ / ಪ್ರ– 1 | 40 ವರ್ಷ |

1) ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು (ಈ ಬಗ್ಗೆ ಮೀಸಲಾತಿ ಕೋರಿದಲ್ಲಿ ಪ್ರಮಾಣಪತ್ರ ಸಲ್ಲಿಸಬೇಕು)
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗದ ಪ್ರತಿ ಸಲ್ಲಿಸಬೇಕು.
3) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಗಳ ಮೀಸಲಾತಿ ಪ್ರಮಾಣಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ ಪ್ರತಿ ಸಲ್ಲಿಸಬೇಕು.(ಮೀಸಲಾತಿ ಕೋರಿದಲ್ಲಿ)
4) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಪ್ರತಿ ಸಲ್ಲಿಸಬೇಕು. (ಮೀಸಲಾತಿ ಕೋರಿದಲ್ಲಿ)
5) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು(ಮೀಸಲಾತಿ ಕೋರಿದ್ದಲ್ಲಿ).
6) ಶಾಲಾ / ಕಾಲೇಜಿನ ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಇತ್ತೀಚಿನ ಎರಡು ನಡತೆ ಪ್ರಮಾಣ ಪತ್ರಗಳ ಪ್ರತಿ ಸಲ್ಲಿಸಬೇಕು.

**ಇತರೆ ಸೂಚನೆಗಳು :**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.
2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.
3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಪೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.
4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ, ಲಗತ್ತಿಸಿದ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.
5) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ/ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
6) ಶೀಘ್ರಲಿಪಿಗಾರ, ಬೆರಳಚ್ಚುಗಾರ ಮತ್ತು ಬೆರಳಚ್ಚು–ನಕಲುಗಾರ ಹುದ್ದೆಗಳ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿ ಅರ್ಹ ಅಭ್ಯರ್ಥಿಗಳಿಗೆ ಮಾತ್ರ 1:5 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.

7) ಜಾರಿಕಾರ ಹುದ್ದೆಯ ಅಭ್ಯರ್ಥಿಗಳಿಗೆ ಗರಿಷ್ಟ ಅಂಕ ಆಧಾರದ ಅರ್ಹತೆ ಮೇರೆಗೆ 1:25 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.
8) ಜವಾನರ ಹುದ್ದೆಯ ಅಭ್ಯರ್ಥಿಗಳಿಗೆ ಗರಿಷ್ಟ ಅಂಕ ಆಧಾರದ ಅರ್ಹತೆ ಮೇರೆಗೆ 1:10 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.
9) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ಅಭ್ಯರ್ಥಿಗಳಿಗೆ ಸೂಚನೆ:–**

1) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.
2) ಅಪೂರ್ಣವಾಗಿರುವ ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಛಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.
4) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
5) ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ 5–00 ರೂಪಾಯಿ ಅಂಚೆ ಮುದ್ರಾಂಕ (ಪೋಸ್ಟಲ್ ಸ್ಟ್ಯಾಂಪ್) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
6) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.
7) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.
8) ವಿವರಗಳನ್ನು ಕಾಲಂಗಳಲ್ಲಿ ಭರ್ತಿ ಮಾಡಿ ಬರೆದ ಅರ್ಜಿಗಳನ್ನು ಅಂಚೆ ಅಥವಾ ಕೋರಿಯರ್ ಮೂಲಕ ಅಥವಾ ಸ್ವಂತಾಗಿ ತಂದು ಸಲ್ಲಿಸಿದಲ್ಲಿ ಈ ಕಛೇರಿಯ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

**ಸಾಮಾನ್ಯ ಸೂಚನೆ:**

1) ನೈತಿಕ ದುರ್ನಡತೆಯಿಂದಾಗಿ / ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ / ಕೇಂದ್ರ / ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ / ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ / ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.
2) ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.
3) ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.
4) ಅಭ್ಯರ್ಥಿಗಳ ಅರ್ಹತೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.

**ವಿಶೇಷ ಸೂಚನೆ :**

ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಂಚೆಯ ಮತ್ತು ಕೋರಿಯರ್ ಮೂಲಕ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಮಾಹಿತಿಯನ್ನು ಸಂಪೂರ್ಣವಾಗಿ ಓದಿ ತಿಳಿದುಕೊಂಡು ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ/ ಗಣಕೀಕೃತ ಪ್ರತಿಯಲ್ಲಿ ಎಲ್ಲಾ ಅಂಕಣಗಳನ್ನು ನಿಗದಿತ ಉತ್ತರಗಳಿಂದ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಕೆ.ವಿ. ಕೃಷ್ಣಮೂರ್ತಿ**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೊಪ್ಪಳ.

## ಅರ್ಜಿ ನಮೂನೆ

ಇತ್ತೀಚಿನ ಭಾವಚಿತ್ರ ಲಗತ್ತಿಸಬೇಕು.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಪ್ಪಳ ಜಿಲ್ಲೆ, ಕೊಪ್ಪಳ– ಇವರಿಗೆ.

ಮಾನ್ಯರೇ,

ಕೊಪ್ಪಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ ಎಡಿಎಂಎನ್––––––––––––––– /2010 ದಿನಾಂಕ: ರ ಪ್ರಕಾರ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ / ಬೆರಳಚ್ಚು–ನಕಲುಗಾರರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | | |
|---|---|---|---|---|---|---|
| 1 | ಅಭ್ಯರ್ಥಿಯ ಹೆಸರು | | | | | |
| 2 | ತಂದೆಯ/ತಾಯಿಯ/ಗಂಡನ ಹೆಸರು | | | | | |
| 3 | ಪೂರ್ಣ ವಿಳಾಸ | | | | | |
| 4 | ಜನ್ಮ ದಿನಾಂಕ ಮತ್ತು ವಯಸ್ಸು | | | | | |
| 5 | ಲಿಂಗ | | ಪುರುಷ/ ಮಹಿಳೆ | | | |
| 6 | ವಿವಾಹಿತರಾಗಿದ್ದರೆ ಗಂಡನ ಅಥವಾ ಹೆಂಡತಿಯ ಹೆಸರು | | | | | |
| 7 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | | | | | |
| 8 | ರಾಷ್ಟ್ರೀಯತೆ :<br>ಜಾತಿ/ ಉಪಜಾತಿ: | | | | | |
| 9 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡವಾರು ಅಂಕಗಳು | |
| ಎ | ಎಸ್.ಎಸ್.ಎಲ್.ಸಿ/<br>ತತ್ಸಮಾನ ಪರೀಕ್ಷೆ | | | | | |
| ಬಿ | ಕಿರಿಯ ದರ್ಜೆಯ ಕನ್ನಡ<br>ಬೆರಳಚ್ಚು ಪರೀಕ್ಷೆ | | | | | |
| ಸಿ | ಹಿರಿಯ ದರ್ಜೆಯ ಕನ್ನಡ<br>ಬೆರಳಚ್ಚು ಪರೀಕ್ಷೆ | | | | | |
| ಡಿ | ಕಿರಿಯ ದರ್ಜೆಯ ಆಂಗ್ಲ<br>ಬೆರಳಚ್ಚು ಪರೀಕ್ಷೆ | | | | | |
| ಇ | ಹಿರಿಯ ದರ್ಜೆಯ ಆಂಗ್ಲ<br>ಬೆರಳಚ್ಚು ಪರೀಕ್ಷೆ | | | | | |
| ಎಫ್ | ಕಿರಿಯ ದರ್ಜೆಯ ಕನ್ನಡ<br>ಶೀಘ್ರಲಿಪಿ ಪರೀಕ್ಷೆ | | | | | |
| ಜಿ | ಹಿರಿಯ ದರ್ಜೆಯ ಕನ್ನಡ<br>ಶೀಘ್ರಲಿಪಿ ಪರೀಕ್ಷೆ | | | | | |
| ಹೆಚ್ | ಕಿರಿಯ ದರ್ಜೆಯ ಆಂಗ್ಲ<br>ಶೀಘ್ರಲಿಪಿ ಪರೀಕ್ಷೆ | | | | | |

| | | | | | |
|---|---|---|---|---|---|
| ಐ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| 10 | ಜಾತಿ /ಗ್ರಾಮೀಣ / ಮಾಜಿಸೈನಿಕ / ಅಂಗವಿಕಲ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 11 | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರು ವಿವರಗಳು | | | | |

**ಸೂಚನೆ:–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ/ ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಕೊಪ್ಪಳ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ.

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ಶ್ರೀಮತಿ ...........................................................................................ಇವರು ನಮ್ಮ ಇಲಾಖೆಯಲ್ಲಿ ದಿನಾಂಕ: ರಿಂದ ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು......................................... ಹುದ್ದೆಗೆ ಅರ್ಹರಿರುತ್ತಾರೆ ಮತ್ತು .........................................ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ಪದನಾಮ:

ದಿನಾಂಕ: ಕಛೇರಿಯ ಮೊಹರು:

**ಅರ್ಜಿ ನಮೂನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಪ್ಪಳ ಜಿಲ್ಲೆ, ಕೊಪ್ಪಳ– ಇವರಿಗೆ.

| |
|---|
| ಇತ್ತೀಚಿನ ಭಾವಚಿತ್ರ ಲಗತ್ತಿಸಬೇಕು. |

ಮಾನ್ಯರೇ,

ಕೊಪ್ಪಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ ಎಡಿಎಂಎನ್– /2010 ದಿನಾಂಕ: ರ ಪ್ರಕಾರ ಆದೇಶಿಕ ಜಾರಿಕಾರರ / ಜವಾನರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | |
|---|---|---|
| 1 | ಅಭ್ಯರ್ಥಿಯ ಹೆಸರು | |
| 2 | ತಂದೆಯ/ತಾಯಿಯ/ಗಂಡನ ಹೆಸರು | |
| 3 | ಪೂರ್ಣ ವಿಳಾಸ | |

| | | | | | |
|---|---|---|---|---|---|
| 4 | ಜನ್ಮ ದಿನಾಂಕ ಮತ್ತು ವಯಸ್ಸು | | | | |
| 5 | ಲಿಂಗ | ಪುರುಷ/ ಮಹಿಳೆ | | | |
| 6 | ವಿವಾಹಿತರಾಗಿದ್ದರೆ ಗಂಡನ ಅಥವಾ ಹೆಂಡತಿಯ ಹೆಸರು | | | | |
| 7 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | | | | |
| 8 | ರಾಷ್ಟ್ರೀಯತೆ :<br>ಮತ:<br>ಜಾತಿ/ ಉಪಜಾತಿ: | | | | |
| 9 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡವಾರು ಅಂಕಗಳು |
| ಎ | ಎಸ್.ಎಸ್.ಎಲ್.ಸಿ/<br>ತತ್ಸಮಾನ ಪರೀಕ್ಷೆ (ಜಾರಿಕಾರರ ಹುದ್ದೆಗೆ) | | | | |
| | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| | 7ನೇ ತರಗತಿ ಪರೀಕ್ಷೆ / (ಜವಾನರ ಹುದ್ದೆಗೆ) | | | | |
| 10 | ಜಾತಿ /ಗ್ರಾಮೀಣ / ಮಾಜಿಸೈನಿಕ / ಅಂಗವಿಕಲ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 11 | ಅರ್ಜಿದಾರರು ವಾಹನ ಚಾಲನೆಯ ಲೈಸೆನ್ಸ್ ಹೊಂದಿರುವರೇ?<br>(ಆದೇಶಿಕ ಜಾರಿಕಾರ ಹುದ್ದೆಗೆ ಮಾತ್ರ) | | | | |
| 12 | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರು ವಿವರಗಳು | | | | |

**ಸೂಚನೆ:–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ/ ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಕೊಪ್ಪಳ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ:

ದಿನಾಂಕ:

ಅಭ್ಯರ್ಥಿಯ ಸಹಿ.

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ಶ್ರೀಮತಿ ..................................................ಇವರು ನಮ್ಮ ಇಲಾಖೆಯಲ್ಲಿ ದಿನಾಂಕ: ರಿಂದ ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು............................................ ಹುದ್ದೆಗೆ ಅರ್ಹರಿರುತ್ತಾರೆ ಮತ್ತು ..ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ಪದನಾಮ:

ದಿನಾಂಕ: ಕಛೇರಿಯ ಮೊಹರು:

ಪಿ.ಆರ್. 228

## ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ

**ಅಧಿಸೂಚನೆ ಸಂಖ್ಯೆ: ADM.DJS.3840–76/2010, ದಿನಾಂಕ: 25ನೇ ಮಾರ್ಚ್ 2010**

**ವಿಷಯ:** ಶೀಘ್ರಲಿಪಿಕಾರ, ಬೆರಳಚ್ಚುಗಾರ, ಬೆರಳಚ್ಚು–ನಕಲುಗಾರ, ಪ್ರೋಸೆಸ್ ಜಾರಿಕಾರ ಹಾಗೂ ಜವಾನ ಹುದ್ದೆಗಳ ನೇಮಕಾತಿ ಬಗ್ಗೆ

**ಉಲ್ಲೇಖ:** 1. ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA II.205/2004 ದಿನಾಂಕ:17–6–2009.
2. ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ:LCA I.220/96 ದಿನಾಂಕ:8.3.2010.
3. ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA II.164/2009 ದಿನಾಂಕ:18–3–2010.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 08 ಸೆಹಿಮ ದಿನಾಂಕ: 95 20–6–1995.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕಃ22.11.2002
6. ಸರ್ಕಾರಿ ಆದೇಶ ಸಂಖ್ಯೆ: DPAR 08 SRS 95 ದಿನಾಂಕಃ20.6.1995.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 53 ಸೇನೆನಿ 2007 ದಿನಾಂಕಃ4.1.2008.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 53 ಸೇನೆನಿ 2007 ದಿನಾಂಕಃ4.1.2008.
9. ಸರ್ಕಾರಿ ಅಧಿಸೂಚನೆ ಸಂಖ್ಯೆ: LAW 01 LAC 2005 ದಿನಾಂಕಃ13–2–2008.
10. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಸೇನೆನಿ 2006 ದಿನಾಂಕಃ4.8.2009.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 12–5–2010.**

ಶಿವಮೊಗ್ಗ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಘಟಕದ ವಿವಿಧ ನ್ಯಾಯೊಲಯಗಳಲ್ಲಿ ಕೆಳಗೆ ವಿವರಿಸಿರುವಂತೆ ಖಾಲಿ ಇರುವ ಶೀಘ್ರಲಿಪಿಕಾರ, ಬೆರಳಚ್ಚುಗಾರ, ಬೆರಳಚ್ಚು–ನಕಲುಗಾರ, ಪ್ರೋಸೆಸ್ ಜಾರಿಕಾರರು ಮತ್ತು ಜವಾನ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಅಹ್ವಾನಿಸಲಾಗಿದೆ. ಅರ್ಹ ಅಭ್ಯರ್ಥಿಗಳು ಈ ಅಧಿಸೂಚನೆಗೆ ಲಗತ್ತಿರುವ ಅರ್ಜಿ ನಮೂನೆಯಲ್ಲಿ, ಬೇರೆ ಬೇರೆ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

**1. ಶೀಘ್ರಲಿಪಿಗಾರರು (Stenographer)**

(1) ಹುದ್ದೆಗಳ ಸಂಖ್ಯೆ: 06

(2) ವೇತನ ಶ್ರೇಣಿ : 7275–175–7800–200–8600–225–9500–250–10500–300–12300–350–13350 ಹಾಗೂ ಇತರೆ ಭತ್ಯೆಗಳು

(3) ಹುದ್ದೆಗಳ ವರ್ಗೀಕರಣ :

| | ಇತರೆ | ಗ್ರಾಮೀಣ ಅಭ್ಯರ್ಥಿ | ಮಹಿಳೆ | ಮಾಜಿ ಸೈನಿಕ | ಅಂಗವಿಕಲ (ದೃಷ್ಟಿಮಾಂದ್ಯ) | ಒಟ್ಟು |
|---|---|---|---|---|---|---|
| ಸಾ.ಅ | 01 | –– | 01 | 01 | –– | 03 |
| ಪರಿಶಿಷ್ಟ ಜಾತಿ | –– | –– | –– | –– | 01 | 01 |
| 2ಎ | –– | 01 | –– | –– | 01 | 02 |
| **ಒಟ್ಟು** | **01** | **01** | **01** | **01** | **02** | **06** |

**(4) ಶೈಕ್ಷಣಿಕ ವಿದ್ಯಾರ್ಹತೆ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಮತ್ತು ಶೀಘ್ರಲಿಪಿಯಲ್ಲಿ ಹಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ

**2. ಬೆರಳಚ್ಚುಗಾರ (TYPIST)**

(1) ಹುದ್ದೆಗಳ ಸಂಖ್ಯೆ: 10

(2) ವೇತನ ಶ್ರೇಣಿ : 5800–100–6000–125–6500–150–7100–175–7800–200–8600–225–9500–250–10500 ಹಾಗೂ ಇತರೆ ಭತ್ಯೆಗಳು

(3) ಹುದ್ದೆಗಳ ವರ್ಗೀಕರಣ :

| | ಇತರೆ | ಗ್ರಾಮೀಣ ಅಭ್ಯರ್ಥಿ | ಮಹಿಳೆ | ಯೋಜನಾ ನಿರಾಶ್ರಿತ | ಒಟ್ಟು |
|---|---|---|---|---|---|
| ಸಾ.ಅ | 01 | 01 | 02 | 01 | 05 |
| ಪರಿಶಿಷ್ಟ ಜಾತಿ | –– | 01 | –– | –– | 01 |
| ಪರಿಶಿಷ್ಟ ಪಂಗಡ | –– | –– | 01 | –– | 01 |

| | | | | | |
|---|---|---|---|---|---|
| ಪ್ರವರ್ಗ – 1 | -- | -- | 01 | -- | 01 |
| ಪ್ರವರ್ಗ – 2ಎ | -- | -- | 01 | -- | 01 |
| ಪ್ರವರ್ಗ – 2ಬಿ | -- | -- | 01 | -- | 01 |
| **ಒಟ್ಟು** | **01** | **02** | **06** | **01** | **10** |

**(4) ಶೈಕ್ಷಣಿಕ ವಿದ್ಯಾರ್ಹತೆ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಹಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ

**3. ಬೆರಳಚ್ಚು ನಕಲುಗಾರ (TYPIST COPYIST)**

(1) ಹುದ್ದೆಗಳ ಸಂಖ್ಯೆ: 04

(2) ವೇತನ ಶ್ರೇಣಿ : 5800–100–6000–125–6500–150–7100–175–7800–200–8600–225–9500–250–10500 ಹಾಗೂ ಇತರೆ ಭತ್ಯೆಗಳು

(3) ಹುದ್ದೆಗಳ ವರ್ಗೀಕರಣ :

| | **ಮಹಿಳೆ** | **ಕನ್ನಡ ಮಾಧ್ಯಮ** | **ಒಟ್ಟು** |
|---|---|---|---|
| ಸಾ.ಅ | 01 | 01 | 02 |
| ಪರಿಶಿಷ್ಟ ಜಾತಿ | 01 | -- | 01 |
| ಪ್ರವರ್ಗ – 2ಎ | 01 | -- | 01 |
| **ಒಟ್ಟು** | **03** | **01** | **04** |

(4) **ಶೈಕ್ಷಣಿಕ ವಿದ್ಯಾರ್ಹತೆ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಕಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ

**4. ಪ್ರೋಸೆಸ್ ಜಾರಿಕಾರರು (Process Servers)**

(1) ಹುದ್ದೆಗಳ ಸಂಖ್ಯೆ: 13

(2) ವೇತನ ಶ್ರೇಣಿ : 5200–100–6000–125–6500–150–7100–175–7800–200–8200 ಹಾಗೂ ಇತರೆ ಭತ್ಯೆಗಳು

(3) ಹುದ್ದೆಗಳ ವರ್ಗೀಕರಣ :

| | **ಗ್ರಾಮೀಣ ಅಭ್ಯರ್ಥಿ** | **ಮಹಿಳೆ** | **ಯೋಜನಾ ನಿರಾಶ್ರಿತ** | **ಕನ್ನಡ ಮಾಧ್ಯಮ** | **ಅಂಗವಿಕಲ ದೃಷ್ಟಿಮಾಂದ್ಯ** | **ಒಟ್ಟು** |
|---|---|---|---|---|---|---|
| ಸಾ.ಅ | 02 | 03 | 01 | 01 | -- | 07 |
| ಪರಿಶಿಷ್ಟ ಜಾತಿ | 01 | 01 | -- | -- | -- | 02 |
| ಪ್ರವರ್ಗ– 1 | -- | 01 | -- | -- | -- | 01 |
| ಪ್ರವರ್ಗ– 2ಎ | -- | 01 | -- | -- | 01 | 02 |
| ಪ್ರವರ್ಗ–2ಬಿ | -- | 01 | -- | -- | -- | 01 |
| **ಒಟ್ಟು** | **03** | **07** | **01** | **01** | **01** | **13** |

**(4) ಶೈಕ್ಷಣಿಕ ವಿದ್ಯಾರ್ಹತೆ**

(ಅ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(ಆ) ವಾಹನ ಚಾಲನೆಯ ಲೈಸನ್ಸ್ ಇರುವವವರಿಗೆ ಆದ್ಯತೆ ನೀಡಲಾಗುವುದು.

**5. ಜವಾನರು: (Peon)**

(1) ಹುದ್ದೆಗಳ ಸಂಖ್ಯೆ: 14

(2) ವೇತನ ಶ್ರೇಣಿ : 4800–100–6000–125–6500–150–7100–175–7275 ಹಾಗೂ ಇತರೆ ಭತ್ಯೆಗಳು

(3) ಹುದ್ದೆಗಳ ವರ್ಗೀಕರಣ :

| | ಇತರೆ | ಗ್ರಾಮೀಣ ಅಭ್ಯರ್ಥಿ | ಮಹಿಳೆ | ಯೋಜನಾ ನಿರಾಶ್ರಿತ | ಕನ್ನಡ ಮಾಧ್ಯಮ | ಅಂಗವಿಕಲ ದೃಷ್ಟಿಮಾಂದ್ಯ | ಒಟ್ಟು |
|---|---|---|---|---|---|---|---|
| ಸಾ.ಅ | 01 | 02 | 02 | 01 | 01 | -- | 07 |
| ಪರಿಶಿಷ್ಟ ಜಾತಿ | -- | 01 | 01 | -- | -- | 01 | 03 |
| ಪ್ರವರ್ಗ – 1 | -- | -- | 01 | -- | | -- | 01 |
| ಪ್ರವರ್ಗ– 2ಎ | -- | 01 | 01 | -- | -- | 01 | 03 |
| **ಒಟ್ಟು** | **01** | **04** | **05** | **01** | **01** | **02** | **14** |

**(4) ಶೈಕ್ಷಣಿಕ ವಿದ್ಯಾರ್ಹತೆ**

(ಅ) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

(ಆ) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

**6. ಮೇಲ್ಕಂಡ ಹುದ್ದೆಗಳ ವರ್ಗೀಕರಣವನ್ನು ಈ ಕೆಳಕಂಡ ಸರ್ಕಾರಿ ಆಜ್ಞೆಗಳ ಪ್ರಕಾರ ಮಾಡಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: DPAR 08 SRS 95, ದಿನಾಂಕ 20–6–1995.

2) ಸರ್ಕಾರಿ ಆದೇಶ ಸಂಖ್ಯೆ: DPAR 97 SEN 2002, ದಿನಾಂಕ 22–11–2002.

3) ಸರ್ಕಾರಿ ಆದೇಶ ಸಂಖ್ಯೆ: DPAR 08 SRS 95, ದಿನಾಂಕ 4–1–2008.

4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಸೆನೆನಿ 2006 ದಿನಾಂಕ:4.8.2009.

**7. ವಯೋಮಿತಿ:**

(ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು,

(ಬ) ಗರಿಷ್ಠ ವಯೋಮಿತಿ: ಸಾಮಾನ್ಯ ವರ್ಗ : 35 ವರ್ಷಗಳು

2ಎ, 2ಬಿ, 3ಎ, 3ಬಿ : 38 ವರ್ಷಗಳು

ಪರಿಶಿಷ್ಟ ಜಾತಿ :ಪರಿಶಿಷ್ಟ ಪಂಗಡ : ಪ್ರವರ್ಗ–1 : 40 ವರ್ಷಗಳು

ವಿ:ಸೂ: ಮಾಜಿ ಸೈನಿಕರಿಗೆ ಗರಿಷ್ಟ ವಯೋಮಿತಿ ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳ ಸಡಿಲಿಕೆ ಮತ್ತು ವಿಧವೆಯವರಿಗೆ ಮತ್ತು ಅಂಗವಿಕಲರಿಗೆ 10 ವರ್ಷಗಳ ಸಡಿಲಿಕೆ.

**8. ಅರ್ಜಿ ಸಲ್ಲಿಸುವ ವಿಧಾನ:**

(1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಈ ಕೆಳಗೆ ನಮೂದಿಸಿದ ಸ್ವದೃಢೀಕರಿಸಿದ ದಾಖಲೆಗಳೊಂದಿಗೆ ಸಲ್ಲಿಸಬೇಕು.

(2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯನ್ನು ತೋರಿಸುವ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳ ಸ್ವದೃಢೀಕರಿಸಿದ ದಾಖಲೆಗಳು

(3) ಜಾತಿ ಮೀಸಲಾತಿ : ಗ್ರಾಮೀಣ ಅಭ್ಯರ್ಥಿ : ಮಾಜಿ ಸೈನಿಕ : ಅಂಗವಿಕಲ : ಕನ್ನಡ ಮಾಧ್ಯಮ: ಯೋಜನಾ ನಿರಾಶ್ರಿತ: ವಿಧವಾ, ಇತರೆ ಮೀಸಲಾತಿ ಕೋರುವ ಬಗ್ಗೆ ಸಂಬಂಧಿಸಿದವರಿಂದ ಪಡೆದ ದಾಖಲಾತಿಗಳ ಸ್ವದೃಢೀಕರಿಸಿದ ದಾಖಲೆಗಳು

(4) ಹುಟ್ಟಿದ ತಾರೀಖನ್ನು ತೋರಿಸುವ ಬಗ್ಗೆ ದೃಢೀಕರಣ ಪ್ರಮಾಣ ಪತ್ರ

(5) ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸುವುದು.

**9. ಆಯ್ಕೆ ವಿಧಾನ:**

ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007ರ ಪ್ರಕಾರ.

**ಶೀಘ್ರಲಿಪಿಗಾರರ ಹುದ್ದೆಗೆ:**

(1) ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ 5 ನಿಮಿಷಗಳ ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಲಿಪ್ಯಂತರಿಸತಕ್ಕದ್ದು

(2) ಸಂದರ್ಶನ

**ಬೆರಳಚ್ಚುಗಾರರ ಹಾಗೂ ಬೆರಳಚ್ಚು ನಕಲುಗಾರರ ಹುದ್ದೆಗೆ:**

(1) 15 ನಿಮಿಷಗಳ ಉಕ್ತಲೇಖನವನ್ನು ಬೆರಳಚ್ಚುಪಡಿಸತಕ್ಕದ್ದು

(2) ಸಂದರ್ಶನ

**ಪ್ರೋಸೆಸ್ ಜಾರಿಕಾರ ಹುದ್ದೆಗೆ:**

ಕನ್ನಡ ಓದಲು ಮತ್ತು ಬರೆಯಲು ಅಭ್ಯರ್ಥಿ ಹೊಂದಿರುವ ಪ್ರಾವೀಣ್ಯತೆ ಮತ್ತು ಅಭ್ಯರ್ಥಿಯ ಸಾಮಾನ್ಯ ಜ್ಞಾನದ ಬಗ್ಗೆ ಸಂದರ್ಶನ.

**ಜವಾನ ಹುದ್ದೆಗೆ:**

**ಹುದ್ದೆಯ ಬಗ್ಗೆ ಅಭ್ಯರ್ಥಿ ಹೊಂದಿರುವ ಸಾಮರ್ಥ್ಯ ಮತ್ತು ಅರ್ಹತೆಯ ಬಗ್ಗೆ ಸಂದರ್ಶನ.**

10. ಅಭ್ಯರ್ಥಿಯು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವುದು ಕಂಡುಬಂದಲ್ಲಿ ಅಂಥಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.
11. ಅರ್ಜಿಗಳನ್ನು ಶಿವಮೊಗ್ಗ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಕಛೇರಿಗೆ ದಿನಾಂಕಃ12.5.2010 ರಂದು ಸಂಜೆ 5.00 ಘಂಟೆಯ ಒಳಗಾಗಿ ಸಲ್ಲಿಸತಕ್ಕದ್ದು ಹಾಗೂ ಒಂದು ವೇಳೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
12. ಮಹಿಳಾ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದ ಪಕ್ಷದಲ್ಲಿ ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳಲಾಗುವುದು.
13. **ಅಭ್ಯರ್ಥಿಗಳಿಗೆ ಸೂಚನೆ:**
    (1) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ ಹಾಗೂ ಮೀಸಲಾತಿ ಹಾಗೂ ವಯೋ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ನೀಡದ ಅರ್ಜಿಗಳನ್ನು ಯಾವುದೇ ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.
    (2) ಸರ್ಕಾರಿ ಹಾಗೂ ಅರೆಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.
    (3) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ 5–00 ರೂ. ಸ್ಟಾಂಪನ್ನು ಅಂಟಿಸಿರುವ ಸ್ವವಿಳಾಸವಿರುವ ಲಕೋಟೆಯನ್ನು ಲಗತ್ತಿಸಿರಬೇಕು.
    (4) ಅರ್ಜಿದಾರರು ಯಾವ ಹುದ್ದೆಗೆ ಅರ್ಜಿಗಳನ್ನು ಸಲ್ಲಿಸುತ್ತಾರೆ ಎಂಬುದನ್ನು ದಪ್ಪ ಅಕ್ಷರದಲ್ಲಿ ಲಕೋಟೆಯ ಮೇಲೆ ನಮೂದಿಸತಕ್ಕದ್ದು.

**ಎಸ್.ಎಂ. ಶಿವನಗೌಡರ**

ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಶಿವಮೊಗ್ಗ.

**ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಶಿವಮೊಗ್ಗ ಘಟಕದಲ್ಲಿ ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು–ನಕಲುಗಾರ, ಪ್ರೋಸೆಸ್ ಜಾರಿಕಾರ ಹಾಗೂ ಜವಾನ ಹುದ್ದೆಗಳ ನೇಮಕಾತಿಗಾಗಿ ಅರ್ಜಿ**

ಗೆ,
ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,
ಶಿವಮೊಗ್ಗ

| |
|---|
| ಫೋಟೋ ಅಂಟಿಸಲು ಜಾಗ |

ಮಾನ್ಯರೇ,

ತಮ್ಮ ಕಛೇರಿ ನೋಟೀಫಿಕೇಶನ್ ನಂಬರ್: :2010 ದಿನಾಂಕ:25–3–2010 ಪ್ರಕಾರ ಹುದ್ದೆಗೆ ನಾನು ಈ ಮೂಲಕ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೇನೆ.

| | | |
|---|---|---|
| 1 | ಅಭ್ಯರ್ಥಿಯ ಹೆಸರು: | |
| 2 | ತಂದೆಯ : ಗಂಡನ ಹೆಸರು: | |
| 3 | ಲಿಂಗ | |
| 4 | ಅಭ್ಯರ್ಥಿಯ ಖಾಯಂ ಅಂಚೆ ವಿಳಾಸ: | |

| | | |
|---|---|---|
| 5 | ಜನ್ಮ ದಿನಾಂಕ ಮತ್ತು ಅರ್ಜಿ ಸಲ್ಲಿಸಲು ನಿಗದಿಗೊಳಿಸಿದ ಕೊನೆಯ ದಿನಾಂಕದಂದು ವಯಸ್ಸು (ಜನ್ಮ ದಿನಾಂಕ ತೋರಿಸುವ ದಾಖಲೆಗಳನ್ನು ಕೊಡತಕ್ಕದ್ದು) | |
| 6 | ಅಭ್ಯರ್ಥಿಯು ಹಾಲಿ ನೌಕರಿಯಲ್ಲಿರುವವರೇ? ಹಾಗಿದ್ದರೆ ಕೆಲಸದ ವಿವರ ಮತ್ತು ವಾರ್ಷಿಕ ಆದಾಯವನ್ನು ಕೊಡುವುದು. | |
| 7 | ಅಭ್ಯರ್ಥಿಯ ತಂದೆ:ತಾಯಿ:ಪೋಷಕರ ಉದ್ಯೋಗ ಹಾಗೂ ಅವರ ವಾರ್ಷಿಕ ಆದಾಯ | |
| 8 | ವಿದ್ಯಾರ್ಹತೆ (ಸಂಬಂಧಿಸಿದ ದಾಖಲಾತಿಗಳನ್ನು ಲಗತ್ತಿಸುವುದು) | |
| 9 | ರಾಷ್ಟ್ರೀಯತೆ, ಜಾತಿ ಮತ್ತು ಅಭ್ಯರ್ಥಿಯು ಯಾವ ವರ್ಗಕ್ಕೆ ಸೇರಿರುತ್ತಾರೆ? | |
| 10 | ಅಭ್ಯರ್ಥಿಯು ಯಾವ ವರ್ಗದಡಿ ಅರ್ಜಿ ಸಲ್ಲಿಸುತ್ತಾರೆ? (ಪ.ಜಾ. ಪ.ಪಂ. ಪ್ರವರ್ಗ–1, 2ಎ, 2ಬಿ, 3ಎ, 3ಬಿ) (ಗ್ರಾಮೀಣ, ಅಂಗವಿಕಲ, ಯೋಜನಾ ನಿರಾಶ್ರಿತ, ಮಾಜಿ ಸೈನಿಕ, ಕನ್ನಡ ಮಾಧ್ಯಮ) (ತೋರಿಸಲು ಸಂಬಂಧಪಟ್ಟವರಿಂದ ನೀಡಲ್ಪಟ್ಟ ಪ್ರಮಾಣಪತ್ರಗಳ ನಕಲನ್ನು ಹಾಜರುಪಡಿಸುವುದು) | |
| 11 | ಅಭ್ಯರ್ಥಿಯು ವಿಧವೆ:ಅಂಗವಿಕಲ:ಮಾಜಿಸೈನಿಕರೇ? (ಸಂಬಂಧಪಟ್ಟವರಿಂದ ಪಡೆದ ದಾಖಲಾತಿಗಳನ್ನು ಹಾಜರುಪಡಿಸುವುದು) | |
| 12 | ಅರ್ಜಿದಾರರು ವಾಹನ ಚಾಲನೆಯ ಲೈಸೆನ್ಸ್ ಹೊಂದಿರುವರೇ? (ಪ್ರೋಸೆಸ್ ಸರ್ವರ್ ಹುದ್ದೆಗೆ ಮಾತ್ರ) (ದಾಖಲಾತಿ ಹಾಜರುಪಡಿಸುವುದು) | |
| 13 | ಅರ್ಜಿದಾರರು ಸಲ್ಲಿಸಲು ಇಚ್ಛಿಸಿರುವ ಇತರೆ ಯಾವುದಾದರೂ ವಿವರಗಳು | |

ಮೇಲೆ ವಿವರಿಸಿರುವ ಸಂಗತಿಗಳು ಸತ್ಯವಾದುದೆಂದು ಈ ಮೂಲಕ ಘೋಷಿಸುತ್ತೇನೆ ಮತ್ತು ಯಾವುದಾದರೂ ಸಂಗತಿಗಳು ಸುಳ್ಳು ಎಂದು ಕಂಡುಬಂದಲ್ಲಿ ನನ್ನ ನೇಮಕಾತಿಯನ್ನು ರದ್ದು ಮಾಡಬಹುದಾಗಿದೆ.

ದಿನಾಂಕ:

ಸ್ಥಳ:

ಅಭ್ಯರ್ಥಿಯ ರುಜು.

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ಶ್ರೀಮತಿ ..................................................ಇವರು ನಮ್ಮ ಇಲಾಖೆಯಲ್ಲಿ ದಿನಾಂಕ:.......................ರಿಂದ................ ................ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು........................................... ಹುದ್ದೆಗೆ ಅರ್ಹರಿರುತ್ತಾರೆ ಮತ್ತು ...............................ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ: ಸಹಿ:

ಪದನಾಮ:

ದಿನಾಂಕ: ಕಛೇರಿಯ ಮೊಹರು:

ಪಿ.ಆರ್. 220

**ಕರ್ನಾಟಕ ಸರ್ಕಾರ ಅರಣ್ಯ ಇಲಾಖೆ**

**ಹರಾಜು ಪ್ರಕಟಣೆ**

**ಕ್ರ:ಎ5/ಎಸ್‌ಎಎಸ್/ಸಿಆರ್/1/09–10, ಸಾಗರ, ದಿನಾಂಕ: 31ನೇ ಮಾರ್ಚ್ 2010**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಬಯಸುವುದೇನೆಂದರೆ, ಸಾಗರ ಅರಣ್ಯ ವಿಭಾಗದ ಈ ಕೆಳಗೆ ನಮೂದಿಸಿದ ಸರ್ಕಾರಿ ನಾಟಾ ಸಂಗ್ರಹಾಲಯಗಳಲ್ಲಿ ಲಭ್ಯವಿರುವ ಬೀಟೆ, ಸಾಗುವಾನಿ ಹಾಗೂ ಇತರೆ ಜಾತಿಯ ನಾಟಾ, ಸೌದೆ, ಎಳೆ ಇತ್ಯಾದಿಗಳನ್ನು ಆಯಾ ಡಿಪೋವಿನ ಎದುರು ಸೂಚಿಸಿದ ದಿನಾಂಕಗಳಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ನಾಟಾ ಸಂಗ್ರಹಾಲಯದ ಹೆಸರು | ಹರಾಜಿನ ದಿನಾಂಕ ಮತ್ತು ವೇಳೆ | ಹಾಲಿ ದಾಸ್ತಾನು ವಿವರ ( ಎಂ3/ನಂ.ಗಳಲ್ಲಿ) | |
|---|---|---|---|---|
| (2) | ಸರ್ಕಾರಿ ನಾಟಾ ಸಂಗ್ರಹಾಲಯ, ಹೊಸನಗರ | ದಿ: 29–04–2010 ಬೆ.10.00 ರಿಂದ ಹರಾಜು ಪೂರ್ಣ ಗೊಳ್ಳುವವರೆಗೆ | ಬೀಟೆ | 7.897 |
| | | | ನಂದಿ | 18.567 |
| | | | ಜಂಬೆ | 36.148 |
| | | | ಮತ್ತಿ | 16.248 |
| | | | ಹುನಾಲು | 13.135 |
| | | | ನೇರಲು | 9.453 |
| | | | ಹೊನ್ನೆ | 4.665 |
| | | | ಇತರೆ ಜಾತಿ | 22.374 |
| | | | ಅಕೇಶಿಯಾ ನಾಟಾ | 371.729 |
| | | | ಅಕೇಶಿಯಾ ಎಳೆ | 242 ಸಂಖ್ಯೆ |
| | | | ಅಕೇಶಿಯಾ ಬಿಲ್ಲೆಟ್ಸ್ | 84.841 |
| | | | ನೀಲಗಿರಿ ಎಳೆ | 100 ಸಂಖ್ಯೆ. |
| (3) | ಸರ್ಕಾರಿ ನಾಟಾ ಸಂಗ್ರಹಾಲಯ, ಶಿಕಾರಿಪುರ | ದಿ: 30–04–2010 ಬೆ.10.00 ರಿಂದ ಹರಾಜು ಪೂರ್ಣ ಗೊಳ್ಳುವವರೆಗೆ | ಬೀಟೆ | 18.466 |
| | | | ಸಾಗುವಾನಿ | 8.320 |
| | | | ಹುನಾಲು | 5.982 |
| | | | ಮತ್ತಿ | 5.980 |
| | | | ಎತ್ತ್ಯಾಗ | 5.413 |
| | | | ನೇರಲು | 8.525 |
| | | | ಹೊನ್ನೆ | 1.400 |
| | | | ನಂದಿ | 1.557 |
| | | | ಇತರೆ ಜಾತಿ | 4.465 |
| | | | ವಿವಿಧ ಜಾತಿ ಸೈಜು | 11.306 |
| | | | ವಿವಿಧ ಜಾತಿ ಎಳೆಗಳು | 107 ಸಂಖ್ಯೆ |

ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**KARNATAKA FOREST DEPARTMENT**

**SAGAR FOREST DIVISION**

**BRIEF SALE NOTIFICATION**

**No.A5/SAS/CR/1/09-10, Sagar, Dtd. 31st March 2010**

It is hereby notified for general information of the public that Beete, Teak, Other kind timber, poles and firewood available in the following Govt.Timber Depots of Sagar Forest Division will be sold in public auction on the dates shown against each depot.

| Sl. No. | Name of the Depots | Date & time of Auction sale | Approximate quantity of timber, Firewood, R.K.Billets etc., are exposed for sale. ( in M3/Nos.) | |
|---|---|---|---|---|
| 1 | Govt.Timber Depot, Hosanagar | 29-04-2010 at 10.00 a.m. upto end of sale | Teak | 7.897 |
| | | | Nandi | 18.567 |
| | | | Jambe | 36.148 |
| | | | Mathi | 16.248 |
| | | | Hunalu | 13.135 |
| | | | Neralu | 9.453 |
| | | | Honne | 4.665 |
| | | | Other kind | 22.374 |
| | | | Accacia timber | 371.729 |
| | | | Accacia poles | 242 No. |
| | | | Accacia Billets | 84.841 |
| | | | Neelagiri Poles. | 100 No. |
| 2 | Govt.Timber Depot, Shikaripura | 30-04-2010 at 10.00 a.m. upto end of sale | Beete | 18.466 |
| | | | Teak | 8.320 |
| | | | Hunalu | 5.982 |
| | | | Mathi | 5.980 |
| | | | Yathiga | 5.413 |
| | | | Neralu | 8.525 |
| | | | Honne | 1.400 |
| | | | Nandi | 1.557 |
| | | | Other kind timber | 4.465 |
| | | | Other kind Size | 11.306 |
| | | | Other kind poles. | 107 No. |

P.R. 231 Deputy Conservator of Forests, Sagar Division, Sagar.

## ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಸುಬ್ರಹ್ಮಣ್ಯ, ಸುಳ್ಯ ತಾಲೂಕು, ದ.ಕ. 574238

## ಟೆಂಡರು ಪ್ರಕಟಣೆ

**ಕೆ.ಎಸ್.ಎಸ್.ಟಿ. ನಂಬ್ರ: ತಾ.ವಿ:162/2006–07, ದಿನಾಂಕ: 12ನೇ ಮಾರ್ಚ್ 2010**

ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಳದಿಂದ ಈ ಕೆಳಗೆ ವಿವರಿಸಿದ ಕಾಮಗಾರಿಯನ್ನು ನಿರ್ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ ಕಾಯಿದೆ 99 ನಿಯಮ 2000 ದಂತೆ ಐಟಂವಾರು ಟೆಂಡರುಗಳನ್ನು ದ್ವಿಪ್ರತಿಯಲ್ಲಿ ದ್ವಿಲಕೋಟೆ ಪದ್ಧತಿ ಪ್ರಕಾರ ಪ್ರಖ್ಯಾತ ಹಾಗೂ ಅನುಭವಿ ರಥ ಶಿಲ್ಪಿಗಳಿಂದ ಅಥವಾ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಪ್ರಥಮ ದರ್ಜೆ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ.

| ಕ್ರ.ಸಂ. | ಕಾಮಗಾರಿಯ ವಿವರ | ಖಾಲಿ ಟೆಂಡರು ಫಾರಂ ಬೆಲೆ (ಹಿಂತಿರುಗಿಸಲಾಗುವುದಿಲ್ಲ.) | ಟೆಂಡರಿಗೆ ಇರಿಸಿದ ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ. ಗಳಲ್ಲಿ) | ಕೆಲಸ ಪೂರೈಸಲು ಕಾಲಾವಕಾಶ |
|---|---|---|---|---|---|
| 1. | ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ನೂತನ ಬ್ರಹ್ಮರಥವನ್ನು ನಿರ್ಮಿಸುವ ಬಗ್ಗೆ. | 5,000.00 | 1,20,05,552.00 | 1,20,500.00 | 1 ವರ್ಷ 6 ತಿಂಗಳು (ಮಳೆಗಾಲ ಸೇರಿ) |

**ಸೂಚನೆ:**

1. ಕಾಮಗಾರಿಗಾಗಿ ಅರ್ಜಿಗಳನ್ನು ಸ್ವೀಕರಿಸುವ ದಿನಾಂಕ 24–04–2010 ಸಂಜೆ 5.00 ಗಂಟೆಯವರೆಗೆ
2. ಖಾಲಿ ಟೆಂಡರು ಫಾರಂಗಳನ್ನು ನೀಡುವ ದಿನಾಂಕ 29–04–2010 ಸಂಜೆ 5.00 ಗಂಟೆಯವರೆಗೆ

3. ಭರ್ತಿ ಮಾಡಿದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ 30–04–2010 ಮಧ್ಯಾಹ್ನ 12.00 ಗಂಟೆಯವರೆಗೆ
4. ತಾಂತ್ರಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ 30–04–2010 ಅಪರಾಹ್ನ 3.00 ಗಂಟೆಗೆ

**ಷರತ್ತುಗಳು:**

1. ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಲ್ಪಟ್ಟ ಅರ್ಹ ಹಾಗೂ ಅನುಭವೀ ಗುತ್ತಿಗೆದಾರರು, ಬ್ರಹ್ಮರಥ ನಿರ್ಮಾಣ ಸಂಬಂಧ ಟೆಂಡರು ಸಲ್ಲಿಸುವುದಾದಲ್ಲಿ ಗುತ್ತಿಗೆದಾರರು ಹೊಂದಿರುವ ರಥಶಿಲ್ಪಿಯ ಸಮಗ್ರ ಮಾಹಿತಿಯನ್ನು ಅಂದರೆ ಈ ಹಿಂದೆ ಸದ್ರಿ ರಥಶಿಲ್ಪಿ ರಚಿಸಿದ ರಥಗಳ ಛಾಯಾಚಿತ್ರಗಳು, ಹೊಂದಿರುವ ನಿಪುಣ ಮರ ಕೆತ್ತನೆ, ಕೆಲಸದವರು, ಇತ್ಯಾದಿ ಮಾಹಿತಿಯನ್ನು ತಾಂತ್ರಿಕ ಬಿಡ್ಡು ಜೊತೆಯಲ್ಲಿ ಇರಿಸತಕ್ಕದ್ದು.
2. ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರುದಾರರು 1.) ತಾಂತ್ರಿಕ ಬಿಡ್ ಮತ್ತು, 2) ಆರ್ಥಿಕ ಬಿಡ್ ಎಂಬ ಪ್ರತ್ಯೇಕ ಲಕೋಟೆಗಳಲ್ಲಿ ಸಲ್ಲಿಸತಕ್ಕದ್ದು. ತಾಂತ್ರಿಕ ಬಿಡ್ಡು ಮೊದಲು ತೆರೆದು ಅರ್ಹ ಬಿಡ್ಡುದಾರರಯಾದಿ ತಯಾರಿಸಿ ಅಂತಹವರ ಆರ್ಥಿಕ ಬಿಡ್ಡುಗಳನ್ನು ಮಾತ್ರ ತೆರೆಯಲಾಗುವುದು.
3. ತಾಂತ್ರಿಕ ಬಿಡ್ಡಿನ ಲಕೋಟೆಯು ಈ ಕೆಳಗಿನ ದಾಖಲೆಗಳನ್ನು ಹೊಂದಿರತಕ್ಕದ್ದು.
   ಅ) ಕಾಮಗಾರಿಗೆ ಇರಿಸಲಾದ ಇ.ಎಂ.ಡಿ. ಮೊಬಲಗನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳ ಡಿ.ಡಿ. ರೂಪದಲ್ಲಿ ಕಾರ್ಯನಿರ್ವಹಣಾಧಿಕಾರಿ ಇವರಿಗೆ ಸಂದಾಯವಾಗುವಂತೆ ಪಡೆದು ಲಗತ್ತಿಸುವುದು.
   ಆ) ಪ್ರಸ್ತಾವಿತ ಬ್ರಹ್ಮರಥದ ಮಾದರಿಯಂತೆ ಇತರ ರಥಗಳನ್ನು ಈ ಹಿಂದೆ ನಿರ್ಮಿಸಿದ ಬಗ್ಗೆ ರಥದ ಛಾಯಾ ಚಿತ್ರಗಳನ್ನು ಹಾಗೂ ಕೆಲಸ ತೃಪ್ತಿಕರವಾಗಿ ಪೂರೈಸಿದ ಬಗ್ಗೆ ದೃಢೀಕರಣ ಪತ್ರವನ್ನು ಅಂತಹ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಯವರಿಂದ ಪಡೆದು ಲಗತ್ತೀಕರಿಸುವುದು.
   ಇ) 2009–10ನೇ ಸಾಲಿನ ಆದಾಯ ತೆರಿಗೆ/ಮಾರಾಟ ತೆರಿಗೆ ಪಾವತಿಸಿದ ಬಗ್ಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಕ್ಷಮ ಪ್ರಾಧಿಕಾರದಿಂದ ಪಡೆದು ಲಗತ್ತಿಸುವುದು. ಹಾಗೂ TIN ನಂಬ್ರ ಹಾಗೂ PAN ನಂಬ್ರಗಳ ದೃಢೀಕರಣವನ್ನು ನೀಡುವುದು.
   ಈ) ಕಾಮಗಾರಿ ನಿರ್ವಹಿಸಲು ಅವಶ್ಯವಿರುವ ಯಂತ್ರೋಪಕರಣಗಳ ಟೆಂಡರುದಾರರು ಮ್ಹಾಲಕತ್ವ ಹೊಂದಿರುವ ಬಗ್ಗೆ "ಖರೀದಿ ಪತ್ರ"ದ ದಾಖಲೆಯನ್ನು ತಪ್ಪದೇ ಲಗತ್ತಿಸುವುದು, ಹಾಗೂ ಎಲ್ಲಾ ದಾಖಲೆಗಳು ಗಜೆಟೆಡ್ ಅಧಿಕಾರಿಯ ದೃಢಿಕರಣದೊಂದಿಗೆ ಸಲ್ಲಿಸುವುದು.
4. ಆರ್ಥಿಕ ಬಿಡ್ಡಿನ ಲಕೋಟೆಯು ಬ್ರಹ್ಮರಥದ ನಕ್ಷೆ ಹಾಗೂ ಟೆಂಡರು ಶೆಡ್ಯೂಲ್ (ದ್ವಿಪ್ರತಿ) ಒಳಗೊಂಡಿರತಕ್ಕದ್ದು.
5. ಯಾವುದೇ ಕಾರಣಕ್ಕೆ ದರ ಹೆಚ್ಚಳವನ್ನು ಕಾಮಗಾರಿ ಪೂರ್ವದಲ್ಲಿ ಅಥವಾ ನಂತರ ಪರಿಗಣಿಸಲಾಗುವುದಿಲ್ಲ, ಹಾಗೂ ಮುಂಗಡ ಹಣ ನೀಡಲಾಗುವುದಿಲ್ಲ.
6. ಸೂಚಿಸುವ ದರಗಳು ಎಲ್ಲಾ ಸಾಮಾಗ್ರಿ, ಸಾಗಣೆ ವೆಚ್ಚ, ಹೇರುವ ಮತ್ತು ಇಳಿಸುವ ವೆಚ್ಚ, ಕೂಲಿ ಮಜೂರಿ ಸೇರಿದಂತೆ, ಸರಕಾರಕ್ಕೆ ಪಾವತಿಸುವ ಎಲ್ಲಾ ತೆರಿಗೆಗಳು, ಇತ್ಯಾದಿ ಒಳಗೊಂಡಿರತಕ್ಕದ್ದು.
7. ಬಿಲ್ಲುಗಳನ್ನು ಪಾವತಿಸುವ ಸಂದರ್ಭ ಭದ್ರತಾ ಠೇವಣಿಯನ್ನು ಶೇ 6.5, ಆದಾಯ ತೆರಿಗೆ ಶೇ 2.2 ಹಾಗೂ ಮಾರಾಟ ತೆರಿಗೆ ಶೇ 4ರ ದರದಲ್ಲಿ ಮುರಿಯಲಾಗುವುದು.
8. ಕಾಮಗಾರಿಯನ್ನು ಶ್ರೀ ದೇವಳದ ವಠಾರದಲ್ಲಿ ನಿರ್ಮಿಸಿದ ಕಾರ್ಯಗಾರದಲ್ಲಿ ನಿರ್ವಹಿಸತಕ್ಕದ್ದು, ಮತ್ತು ಮರದ ದಿಮ್ಮಿಗಳನ್ನು ಸೈಜುಗಳಾಗಿ ಪರಿವರ್ತಿಸುವ ಸಂದರ್ಭ ಮರದ ಗುಣಮಟ್ಟ ಪರಿಶೀಲಿಸಲು ಶ್ರೀ ದೇವಳದಿಂದ ನಿಯೋಜಿಸಿದ ಅಧಿಕಾರಿಗಳಿಗೆ ಮುಕ್ತವಾಗಿರಿಸತಕ್ಕದ್ದು, ಅಲ್ಲದೆ ಸೈಜುಗಳು ಸಂಪೂರ್ಣವಾಗಿ ಒಣಗಿದ ಬಳಿಕವೇ ಕಾಮಗಾರಿ ಪ್ರಾರಂಭಿಸುವುದು. ಈ ಬಗ್ಗೆ ಶ್ರೀ ದೇವಳದ ಆಡಳಿತೆಯ ತೀರ್ಮಾನವೇ ಅಂತಿಮವಾಗಿರುತ್ತದೆ.
9. ರಥಶಿಲ್ಪವನ್ನು ಶಾಸ್ತ್ರೋಕ್ತ ಹಾಗೂ ಸಾಂಪ್ರದಾಯಿಕ ವಿಧಿಗಳಂತೆ ಶ್ರೀ ದೇವಳದಿಂದ ನಿಯೋಜಿಸಿದ ತಂತ್ರಿಗಳು, ಪ್ರಧಾನ ಅರ್ಚಕರು ಹಾಗೂ ನಿಯೋಜಿಸಿದ ವಾಸ್ತುಶಿಲ್ಪಿಗಳ ಸಲಹೆ ಸೂಚನೆಯಂತೆ ನಿರ್ವಹಿಸತಕ್ಕದ್ದು.
10. ರಥ ನಿರ್ಮಾಣಕ್ಕೆ ಉಪಯೋಗಿಸುವ ಎಲ್ಲಾ ಜೋಡಣಾ ಸಾಮಾಗ್ರಿಗಳು ಐ.ಎಸ್.ಐ. ಅಥವಾ ಐ.ಎಸ್.ಓ. ಪ್ರಾಮಾಣಿತವಾಗಿದ್ದು, ಅಧಿಕೃತ ವಿತರಕರಿಂದ ಪಡೆದು ಉಪಯೋಗಿಸತಕ್ಕದ್ದು.
11. ಷರತ್ತುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕರಿಸಲಾಗುವುದಿಲ್ಲ.
12. ಬ್ರಹ್ಮರಥಕ್ಕೆ ಉಪಯೋಗಿಸುವ ಮರಗಳು ಒಡಕು, ಬೆಳ್ಳೆ (SAP) ಎಳೆಯ ಮರಗಳು, ವಿದೇಶಿ ಮರ, ಸಿಡಿಲು ಬಿದ್ದ ಮರ, ಹಾಗೂ ಕಡಿಮೆ ಸುತ್ತಳತೆಯುಳ್ಳ ಮರಗಳನ್ನು ಸೈಜುಗಳಾಗಿ ಪರಿವರ್ತಿಸಲು ಅವಕಾಶವಿಲ್ಲ. ಮರದ ಆಯ್ಕೆಯಲ್ಲಿ ಶ್ರೀ ದೇವಳದ ತೀರ್ಮಾನವೇ ಅಂತಿಮವಾಗಿರುತ್ತದೆ.
13. ಯಾವುದೇ ಕಾರಣ ನೀಡದೆ ಟೆಂಡರು ಸ್ವೀಕರಿಸುವ ಅಥವಾ ನಿರಾಕರಿಸುವ ಅಧಿಕಾರವನ್ನು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳು ಕಾಯ್ದಿರಿಸಿರುತ್ತಾರೆ.

ಕಾರ್ಯನಿರ್ವಹಣಾಧಿಕಾರಿಗಳು,
ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಸುಬ್ರಹ್ಮಣ್ಯ

ಪಿ.ಡಿ. 54

## ಉದ್ಯೋಗ ಮತ್ತು ತರಬೇತಿ ಇಲಾಖೆ

## ಪ್ರಾಚಾರ್ಯರ ಕಾರ್ಯಾಲಯ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಿ.ಹೆಚ್. ರಸ್ತೆ, ಅರಸೀಕೆರೆ–573103

### ಬಹಿರಂಗ ಹರಾಜಿನ ಅಧಿಸೂಚನೆ

**ಸಂಖ್ಯೆ: ಸಕೈತಸಂ/ಅರಸೀ/ಖರೀದಿ/ಅ.ಸಾ.ವಿ/09–10, ದಿನಾಂಕ: 26ನೇ ಮಾರ್ಚ್ 2010**

ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಅರಸೀಕೆರೆ ಇಲ್ಲಿ ಲಭ್ಯವಿರುವ ಈ ಕೆಳಕಂಡ ಅನುಪಯುಕ್ತ ಕಚ್ಚಾ ಸಾಮಾಗ್ರಿಗಳನ್ನು ದಿ: 10/05/2010 ರಂದು ಬಹಿರಂಗ ಹರಾಜಿನ ಮೂಲಕ ಸಂಸ್ಥೆಯ ಆವರಣದಲ್ಲಿ ವಿಲೇವಾರಿ ಮಾಡಲಾಗುವುದು. ಹರಾಜಿನ ಬಿಡ್ಡ್‌ನ್ನು ಪುರಸ್ಕರಿಸುವ ಮತ್ತು ತಿರಸ್ಕರಿಸುವ ಹಕ್ಕನ್ನು ಸಂಸ್ಥೆಯ ಪ್ರಾಚಾರ್ಯರು ಹೊಂದಿರುತ್ತಾರೆ.

ದಿ: 10/05/2010 ಸಮಯ ಬೆಳಿಗ್ಗೆ 11 ಗಂಟೆ

| Sl. No. | Particulars | Quantity |
|---|---|---|
| 01 | M.S. Scrap | 3147 kg |
| 02 | Alluminium Scrap | 5.5 kg |
| 03 | Electronic Machanic | 24.300 kg |

ಪ್ರಾಚಾರ್ಯರು
ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಅರಸೀಕೆರೆ–573103

ಪಿ.ಆರ್. 221

## ಪೊಲೀಸ್ ಅಧೀಕ್ಷಕರ ಕಚೇರಿ ಉತ್ತರಕನ್ನಡ, ಕಾರವಾರ

### ಅಧಿಸೂಚನೆ

### ಟೆಂಡರ್ ಕಮ್ ಬಹಿರಂಗ ಹರಾಜು

**ಸಂಖ್ಯೆ: ಎಸಿಟಿ–5/ಎಂ.ಟಿ–26/ನಿ/2009–10, ದಿನಾಂಕ: 25ನೇ ಮಾರ್ಚ್ 2010**

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ವಾಹನ ವಿಭಾಗದಲ್ಲಿ ನಿರುಪಯುಕ್ತ ವಾಹನಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ದಿನಾಂಕ: 12/05/2010 ರಂದು ಸಾರ್ವಜನಿಕರಿಗೆ ಮಾರಾಟ ಮಾಡುವುದರ ಕುರಿತು.

**ಉಲ್ಲೇಖ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ/104/ಶಿವಾನೀ/95/ದಿನಾಂಕ: 25/03/1996.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ/142/ಶಿವಾನೀ/2000 ದಿನಾಂಕ: 05/01/2001.

3. ಪ್ರಧಾನ ಕಛೇರಿ ಆದೇಶ ಸಂ: ವಾಸಾ (1)40/09–10 ದಿ: 10/03/2010

ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ, ಉಲ್ಲೇಖ 1, 2 ಮತ್ತು 3 ರ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಉತ್ತರಕನ್ನಡ ಜಿಲ್ಲಾ ಪೊಲೀಸ್ ಇಲಾಖೆಗೆ ಸೇರಿದ ಈ ಕೆಳಕಂಡ ಪೊಲೀಸ್ ವಾಹನಗಳನ್ನು ದಿ: 12/05/2010 ರಂದು ಬೆಳಿಗ್ಗೆ 10–00 ಗಂಟೆಗೆ ಉತ್ತರಕನ್ನಡ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿ ಕಾಜುಬಾಗ ಆವರಣದಲ್ಲಿ ಇರುವ ಸ್ಥಿತಿಯಲ್ಲಿಯೇ ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಈ ವಾಹನಗಳನ್ನು ಖರೀದಿಸಬಹುದಾಗಿದೆ. ಟೆಂಡರ್‌ಗಳನ್ನು ನಿಗದಿತ ಠೇವಣಿಯೊಂದಿಗೆ ದಿ: 11/05/2010 ಸಂಜೆ 04–00 ಗಂಟೆಯೊಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ನಂತರ ಬಂದವುಗಳನ್ನು ಮಾನ್ಯ ಮಾಡಲಾಗುವುದಿಲ್ಲ.

| ಕ್ರ. ಸಂ. | ವಾಹನಗಳ ಹೆಸರು ಮತ್ತು ನೊಂದಣಿ ಸಂಖ್ಯೆ | ಖರೀದಿಸಿದ ವರ್ಷ |
|---|---|---|
| 1 | ಮಹೀಂದ್ರಾ ಜೀಪ್<br>ಸಿಎಜಿ–9618 | 1983 |
| 2 | ಟಾಟಾ 407 ವ್ಯಾನ್<br>ಕೆಎ–30/ಜಿ–93 | 1995 |
| 3 | ಮಹೀಂದ್ರಾ ಮಿನಿ ಬಸ್<br>ಕೆಎ–30/ಜಿ–08 | 1990 |

ಹೆಚ್ಚಿನ ವಿವರಗಳನ್ನು ಜಿಲ್ಲೆಯ ಯಾವುದೇ ಪೊಲೀಸ್ ಠಾಣೆಯ ಅಥವಾ ಈ ಕಛೇರಿಯ ನೋಟೀಸ್ ಬೋರ್ಡಿನಲ್ಲಿರುವ ವಿವರವಾದ ಪ್ರಕಟಣೆಯಿಂದ ತಿಳಿದುಕೊಳ್ಳುವುದು.

ಪೊಲೀಸ್ ಅಧೀಕ್ಷಕರು,
ಉತ್ತರಕನ್ನಡ, ಕಾರವಾರ

